ಡಾ॥ ಕೆ. ಜಿ. ವಸಂತಮಾಧವ

# ಕನ್ನಡ ಕರಾವಳಿಯ ಕೃಷಿ ವಿಸ್ತರಣೆಯಲ್ಲಿ ನಿಮ್ನಹಂತದ ಶೂದ್ರರ ಪಾತ್ರ : ಐತಿಹಾಸಿಕ ನೋಟ

ತುಳು, ಹೈವೆ ಮತ್ತು ಕೊಂಕಣವೆಂದು ಐತಿಹಾಸಿಕ ದಾಖಲೆಗಳಲ್ಲಿ ಕರೆಯಲ್ಪಡುವ ಕನ್ನಡ ಕರಾವಳಿ ಪ್ರದೇಶವು ಉತ್ತರದಲ್ಲಿ ಮಾಜಾಳಿಯಿಂದ ದಕ್ಷಿಣದಲ್ಲಿ ಚಂದ್ರಗಿರಿ ನದಿಯವರೆಗೆ ಹಬ್ಬಿದೆ. ಈ ಅಗಲ ಮತ್ತು ಕಿರಿದಾದ ಕರಾವಳಿಯಲ್ಲಿ ಹಲವಾರು ವಿಧದ ಕೃಷಿ ಭೂಮಿಗಳಿವೆ. ಮಕ್ಕಿ ಗುಡ್ಡ ತಿಟ್ಟು ಬಯಲು ಮಜಲು ಬೆದೆಕಾರು (ಮಳೆಗಾಲದ ನೀರಿನಲ್ಲಿ ಬೇಸಾಯ ಮಾಡುವ ಪ್ರದೇಶ) ಮತ್ತು ಬಾಗಾಯಿತುಗಳೆಂಬ ಕೃಷಿವರ್ಗಗಳ ಭೂಮಿಗಳು ಇವೆ. ಕರಾವಳಿಯಿಂದ ಪೂರ್ವಕ್ಕೆ ಹೋದಂತೆ ಕಾನು, ಕಾಡು ಮತ್ತು ಹೊಲಗಳಿವೆ. ಈ ಕನ್ನಡ ಕರಾವಳಿಯಲ್ಲಿ ಪೂರ್ವದಿಂದ ಪಶ್ಚಿಮಕ್ಕೆ ಹರಿಯುವ ಅಸಂಖ್ಯ ನದಿಗಳಿವೆ. ಈ ನದಿ ಪ್ರದೇಶಗಳು ಫಲವತ್ತಾಗಿವೆ. ಕನ್ನಡ ಕರಾವಳಿಯಲ್ಲಿ ಕೃಷಿ ವಿಸ್ತರಣೆಯಾದುದನ್ನು ಮತ್ತು ಇದರಲ್ಲಿ ಕೆಳವರ್ಗದ ಶೂದ್ರಜಾತಿಯ ಪಾತ್ರವನ್ನು ಕೆಲವು ಶಾಸನಗಳೂ ಜನಜನಿತ ಪಾಡ್ದನಗಳೂ ಮತ್ತು ವಿದೇಶಿ ಬರಹಗಾರರ ಬರಹಗಳೂ ತಿಳಿಸುತ್ತವೆ. ಇಲ್ಲಿ ತಿಳಿಸುವ ನಿಮ್ನಹಂತದ ಶೂದ್ರರು ಮೊಗೇರ, ಕುಂಬಾರ, ಬಿಲ್ಲವ (ಹಳೆಪೈಕ), ಮಲೆಕುಡಿಯ, ಕೊರಗ, ಬಾಕುಡ, ಹೊಲೆಯ, ಇತ್ಯಾದಿ. ಕನ್ನಡ ಕರಾವಳಿ ಮತ್ತು ಆದಕ್ಕೆ ಹೊಂದಿಕೊಂಡ ಪ್ರದೇಶಗಳಲ್ಲಿ ಸಿಕ್ಕಿದ ಶಾಸನಗಳು ಶೂದ್ರ ಜನಾಂಗದವರು ೧೦೧ ಕುಲವೆಂದು ತಿಳಿಸಿದಲ್ಲಿ, ೧೮ ಜಾತಿಗಳಿವೆಯೆಂದೂ ಹೇಳಿ ಕೆಲವು ಪ್ರದೇಶಗಳಲ್ಲಿ ಶೂದ್ರವಾಡ ಇದ್ದುದನ್ನು ತಿಳಿಸುತ್ತವೆ.[1] ಮೇಲುಕೀಳೆಂದು ವರ್ಗೀಕರಿಸಿದ ಹಲವು ಪಂಗಡಗಳು ಶೂದ್ರರೆಂದು ಇಲ್ಲಿ ಅಭಿಪ್ರಾಯಪಡಬಹುದು. ಕೆಲವು ಶೂದ್ರ ಜನಾಂಗದವರು ಬ್ರಾಹ್ಮಣ ಸಂಸ್ಕೃತಿಗೆ ಒಳಗಾಗಿ ಮೇಲುಹಂತದ ಶೂದ್ರರಾದರು. ಇವರು ಹೆಚ್ಚಾಗಿ ಭೂ ಒಡೆಯರು ಮತ್ತು ಬೇಸಾಯಗಾರರಾಗಿದ್ದರೆಂದು ಹಲವಾರು ದಾಖಲೆಗಳ ಅಧ್ಯಯನದಿಂದ ತಿಳಿದು ಬರುತ್ತದೆ. ಆದರೆ ಈ ಶೂದ್ರ ವರ್ಗಕ್ಕಿಂತ, ಕೀಳುಮಟ್ಟದಲ್ಲಿರುವ ಶೂದ್ರರು ಕರಾವಳಿಯ ಕೃಷಿ ಭೂಮಿಯ ರಚನೆ (ವಿಸ್ತರಣೆ) ಯಲ್ಲಿ ಪಾತ್ರವಹಿಸಿದ್ದನ್ನು ಕೆಲವು ದಾಖಲೆಗಳು ತಿಳಿಸುತ್ತವೆ. ತುಳು ಪಾಡ್ದನದಂತೆ ಈ ಶೂದ್ರ ಜನಾಂಗವಾದ ಮೊಗೇರ, ಕೊರಗ, ಬಾಕುಡರು ಓಣಿ, ಕೊಪ್ಪ ಮತ್ತು ಬಯಲುಗಳಲ್ಲಿ ವಾಸಿಸಿ ಮೇಲುವರ್ಗದವರ ಕೃಷಿ ಭೂಮಿ ರಚನೆಯಲ್ಲಿ ಭಾಗವಹಿಸಿದ್ದರು.

ಮೀನು ಹಿಡಿಯುವ ವೃತ್ತಿಯವರಾದ ಮೊಗೇರರು,

---

1. *Epigraphia Carnatica*, VIII, Ti., Nos. 15, 85 ; *Mysore Archaeological Department* 1927, No. 57 ; Ibid., 1928, No. 97 ; Ibid., 1933, No. 28, p. 173 ; *Annual Report on Indian Epigraphy*, 1969, Ah A No. 9
2. Purchas, *Pilgrims*, X, p. 262

ಕಪ್ಪು ಜನಾಂಗದವರೆಂದು ಮತ್ತು ಅತ್ಯಂತ ಕಷ್ಟಗಾರರೆಂದು ಡಚ್ ಪ್ರವಾಸಿ ಲಿನ್ಸ್‌ಕೊತನ್ ತನ್ನ ವರದಿಯಲ್ಲಿ ಬಣ್ಣಿಸಿದ್ದಾನೆ.[2] ಈ ಜಾತಿಯವರು ಕೃಷಿಯಲ್ಲಿ ನಿರತರಾಗಿದ್ದರೆಂದು ಕೆಲವೇ ಶಾಸನಗಳ ಅಧ್ಯಯನದಿಂದ ತಿಳಿದುಬರುತ್ತದೆ. ಉದಾ. ಬಸ್ರೂರಿನ ಶಕ ೧೩೭೩ (ಕ್ರಿ. ಶ. ೧೪೫೧), ಪಡುಪಣಂಬೂರಿನ ಶಕ ೧೪೬೪ (ಕ್ರಿ. ಶ. ೧೫೪೨) ಮತ್ತು ಭಟ್ಕಳದ ಹತ್ತಿರದ ಕನ್ನರ ಬಯಲಿನ ಶಕ ೧೪೬೧ (ಕ್ರಿ. ಶ. ೧೫೩೮) ಶಾಸನಗಳು[3] ಮೊಗೇರರ ಗದ್ದೆಗಳನ್ನು ತಿಳಿಸಿವೆ. ಈ ಜಾತಿಯವರು ಸಮುದ್ರ ಕಿನಾರೆಯಲ್ಲಿ ನೆಲಸಿದ್ದರಿಂದ, ಪೋರ್ತುಗೀಜರೊಡನೆ ನಿಕಟ ಸಂಪರ್ಕಕ್ಕೆ ಬಂದರು. ಪೋರ್ತುಗೀಜರಿಗೆ ಅಗತ್ಯವಿರುವ ವಾಣಿಜ್ಯ ಬೆಳೆಗಳ ಕೃಷಿಗೆ ಈ ಮೊಗೇರ ಜಾತಿಯವರನ್ನು ಉಪಯೋಗಿಸಿಕೊಂಡಿದ್ದರೆಂದು ಡಚ್ ಪ್ರವಾಸಿ ಲಿನ್ಸ್‌ಕೊತೆನ್ ೧೫೮೦ ರಲ್ಲಿ ಹೇಳಿದ್ದಾನೆ. ಕ್ರಿ. ಶ. ೧೬೩೦ ರಲ್ಲಿ ಪೋರ್ತುಗೀಜರು ಗಂಗೊಳ್ಳಿಯನ್ನು ವಶಪಡಿಸಿಕೊಂಡ ನಂತರ, ಇಲ್ಲಿ ಜೀವಿಸಿದ್ದ ಮೊಗೇರರ ಜಾತಿಯವರ ಶ್ರಮದಿಂದ ಇಲ್ಲಿ ಕರಿಮೆಣಸು, ಭತ್ತ, ತೆಂಗು ಕೃಷಿ ಹೆಚ್ಚಿಸಲು ಇಚ್ಛಿಸಿದ್ದರೆಂದು ಇವರ ಒಂದು ದಾಖಲೆ ತಿಳಿಸುತ್ತದೆ.[4] ಇವರ ಶ್ರಮದಿಂದಲೇ ಗಂಗೊಳ್ಳಿಯ ಸಮುದ್ರ ಕಿನಾರೆ ಪ್ರದೇಶ ಫಲವತ್ತಾಗಿತ್ತು ಎಂದು ಕೆಲವು ದಾಖಲೆಗಳ ಅಧ್ಯಯನದಿಂದ ತಿಳಿದುಬರುತ್ತದೆ. ಅಂಕೋಲೆಯಿಂದ ಗಂಗೊಳ್ಳಿಯ (ದ.ಕ.)ವರೆಗಿನ ಪ್ರದೇಶದಲ್ಲಿ ನೆಲಸಿದ, ಮೊಗೇರ ಜಾತಿಯ ಹೆಚ್ಚಿನವರು ಕ್ರೈಸ್ತ ಮತವನ್ನು ಪೋರ್ತುಗೀಜರ ಪ್ರೇರಣೆಯಿಂದ ಸ್ವೀಕರಿಸಿದರು. ಇದರಿಂದ ಈ ಜನಾಂಗದವರು ಇನ್ನಿತರ ಹಿಂದು ಸಮಾಜದಿಂದ ಬಹಿಷ್ಕರಿಸಲ್ಪಟ್ಟಿದ್ದರಿಂದ ಅವರ ಮೀನುಗಾರಿಕೆ ಮತ್ತು ಕೃಷಿಯ ಉದ್ಯೋಗಕ್ಕೆ ಧಕ್ಕೆ ಉಂಟಾಗಿ ಅವರು ಈ ಪ್ರದೇಶಗಳಲ್ಲಿ ನಿಕೃಷ್ಟ ಸ್ಥಾನವನ್ನು ಹೊಂದಿದ್ದರೆಂದು ಕ್ರಿ.ಶ. ೧೬೭೬ರಲ್ಲಿ ಬಂದ ಆಂಗ್ಲ ಪ್ರವಾಸಿ ಡಾ॥ ಫ್ರಾಯರ ತನ್ನ ವರದಿಯಲ್ಲಿ ತಿಳಿಸಿದ್ದಾನೆ.[5]

ಮಂಗಳೂರಿನ ದಕ್ಷಿಣಕ್ಕೆ ಇರುವ ಮೊಗೇರ (ಮೊಕರಿ)ರು ಸಾಗರೋತ್ತರ ವ್ಯಾಪಾರದಲ್ಲಿ ನಿರತರಾಗಿದ್ದರು. ಇವರ ಸಹಾಯದಿಂದ ಕನ್ನಡ ಕರಾವಳಿಯ ಅರಸು ಮನೆತನದವರು ತಮ್ಮ ವ್ಯಾಪಾರ ವಿಸ್ತರಿಸಿಕೊಂಡರು. ಇಷ್ಟಲ್ಲದೆ ಈ ಜಾತಿಯ ಕೆಲವು ಜನರು ಗಜನಿ[6] ಪ್ರದೇಶವನ್ನು ಫಲವತ್ತಾಗಿ ಮಾಡಿದ್ದರು. ಇಲ್ಲಿ ನೆಲಸಿದ ಮೊಗೇರ ಜನಾಂಗ ಮುಸ್ಲಿಂ ಮತವನ್ನು ಸ್ವೀಕರಿಸಿ ಬೊಬ್ಬರಿಯಾ ದೈವವನ್ನು ಆದರದಿಂದ ಗೌರವಿಸುತ್ತಿದ್ದರು.[7]

ಮಡಿಕೆ ಮಾಡುವ ಕುಂಬಾರರು ಉಪ್ಪುಂದ, ಗುಜ್ಜಾಡಿ, ಬಸ್ರೂರು, ಶಂಕರನಾರಾಯಣ, ಬಂಟವಾಳ, ಮಂಜೇಶ್ವರ ಮತ್ತು ಬಂಗಾಡಿಯಲ್ಲಿ ಕೃಷಿಕರಾಗಿದ್ದು ಹೆಚ್ಚಿನ ಬೆಟ್ಟು ಪ್ರದೇಶಗಳನ್ನು ಕೃಷಿ ಭೂಮಿಯಾಗಿ ಮಾಡಿದ್ದರೆಂದು ಶಾಸನಗಳು ಮತ್ತು ಸ್ಥಳೀಯ ದಾಖಲೆ ಪತ್ರಗಳಿಂದ ತಿಳಿದುಬರುತ್ತದೆ.[8] ಹಟ್ಟಿಯಂಗಡಿ

---

3. *SII*, IX, Pt. II, No. 457; Ibid., VII, 264; *KI*, III, No. 9, Lines-29, 30
4. ತಾ॥ ೧೬-೧-೧೬೩೦ ರ ಕ್ಯಾಪ್ಟನ್ ಮಿನೇಜಸನ ಪತ್ರ-*Panjim Archives*, folio 481-82: Heras: The Expansion of Wars of Venkatappa Nayaka of Ikkeri, *Historical Records Commission*, XI, (1928), p. 113
5. *Calcutta Weekly Englishman*, (London, 1873), p. 388
6. ಸಮುದ್ರ ಹಿಂದೆ ಸರಿಯುವಿಕೆ ಅಥವಾ ನದಿ ಹರಿಯುವ ದಿಕ್ಕನ್ನು ಬದಲಾಯಿಸಿದಾಗ ಫಲವತ್ತಾದ ಭೂಮಿ ಆಗುತ್ತದೆ. ಇದನ್ನೇ ಗಜನಿ ಎನ್ನುತ್ತಾರೆ. ಮಂಗಳೂರಿಸ ದಕ್ಷಿಣಕ್ಕೆ ಇರುವ ಗಜನಿಯ ಕೃಷಿ ಮೊಗೇರ ಮತ್ತು ಕ್ರೈಸ್ತರ ಶ್ರಮದಿಂದಲೇ ಆಗಿದೆ.
7. ಕೆ. ವಾದಿರಾಜಭಟ್ಟ, ಪಾಡ್ದನಗಳು, (ಕಿನ್ನಿಗೋಳಿ, ೧೯೭೬), ಪು. ೧೯೧-೪
8. *SII*, IX, Pt. II, No. 517, Line [illegible]; 620, Line 38; ಶಕ ೧೪೭೯ರ ಉಪ್ಪುಂದ ದುರ್ಗಾ ಪರಮೇಶ್ವರಿ ದೇವಾಲಯದ ಎರಡು ಶಾಸನಗಳು (ಅಪ್ರಕಟಿತ): *ARSIE*, 1969, Ap No. 7, Line 4; ಐಗಳ ಎಮ್.ಜಿ. ಮಂಜೇಶ್ವರ, (ಮಂಗಳೂರು, ೧೯೭೪), Ah No. 31

ಯಲ್ಲಿರುವ ಬೆಟ್ಟು ಭೂಮಿ ಕುಂಬಾರ ಗದ್ದೆಯಾಗಿ ಪರಿಣಮಿಸಿದುದು ಮತ್ತು ಉಳ್ಳಾಳ ಗ್ರಾಮದಲ್ಲಿ ಹೊಲವನ್ನು ಕುಂಬಾರರು ಕೃಷಿ ಭೂಮಿಯಾಗಿ ಮಾಡಿದುದು ಬಸ್ರೂರಿನ ಶಕ ೧೪೬೮ (ಕ್ರಿ. ಶ. ೧೫೪೬) ಮತ್ತು ಮಂಜೇಶ್ವರ ಶಕ ೧೬೩೭ (ಕ್ರಿ. ಶ. ೧೭೧೫)[9] ಶಾಸನ ಮತ್ತು ಪತ್ರ ದಾಖಲೆಗಳಿಂದ ತಿಳಿದು ಬರುತ್ತದೆ. ಆದರೆ ಕುಂಬಾರರು ಉಳ್ಳಾಳದಲ್ಲಿ ಕೃಷಿ ಮಾಡಿದ ಭೂಮಿಯ ಸುಬ್ರಾಯ ಭಟ್ಟನಿಗೆ ಮೂಲಿಯನ್ನು ಕೆಳದಿ ಸೋಮಶೇಖರ ನಾಯಕನು ಕೊಟ್ಟನು. ಇದರಿಂದ ಕುಂಬಾರರು ವಕ್ಕಲಿಗರಾಗಿ ದೇವಸ್ಥಾನ ಭೂಮಿಯನ್ನು ಕೃಷಿ ಮಾಡಿಕೊಂಡು ಇರಬೇಕಾಯಿತು. ಬಿಲ್ಲವ ಅಥವಾ ಹಳೆಪೈಕರು ಕೃಷಿ ಭೂಮಿಯ ರಚನೆಗೆ ಬಹಳ ಸಹಕರಿಸಿದ್ದರೆಂದು ಸ್ಥಳೀಯ ಜನಜನಿತ ಐತಿಹ್ಯ ಮತ್ತು ದಾಖಲೆಗಳಿಂದ ತಿಳಿದು ಬರುತ್ತದೆ ; ಬಾರಕೂರು, ಚೊಕ್ಕಾಡಿ ಮತ್ತು ಹೆರೂರುಗಳಲ್ಲಿ ಬಿಲ್ಲವರು ಗದ್ದೆಗಳನ್ನು ಹೊಂದಿ ಬೇಸಾಯದಲ್ಲಿ ನಿರತರಾಗಿದ್ದರೆಂದು ಶಕ ೧೩೪೨ (ಕ್ರಿ. ಶ. ೧೪೨೦) ಮತ್ತು ೧೩೩೬ (ಕ್ರಿ.ಶ. ೧೪೪೪) ರ ಶಾಸನಗಳಿಂದ ತಿಳಿದುಬರುತ್ತದೆ.[10] **ಕೋಟಿ-ಚೆನ್ನಯ** ಪಾಡ್ದನವು ಬಿಲ್ಲವರು ಸುಗ್ಗಿ ಮತ್ತು ಕಾತಿ ಬೆಳೆಗಳನ್ನು ಬೆಳೆಸಿ ಪರಿಮಳೆ ಪಂಜ ಸೀಮೆಯ ಭೂಮಿಯನ್ನು ಕೃಷಿ ಪ್ರದೇಶವಾಗಿ ಮಾಡಿದ್ದನ್ನು ತಿಳಿಸುತ್ತದೆ.[11] ಕಲ್ಯಾಣಪುರ ಹೊಳೆಯಿಂದ ಉತ್ತರಕ್ಕಿರುವ ಕರಾವಳಿ ಪ್ರದೇಶದಲ್ಲಿ ಬಿಲ್ಲವರು, ಸಮ ಜಾತಿಯವರು ಹಳೆಪೈಕರು ಇವರು ಇಲ್ಲಿ ಪ್ರಾಬಲ್ಯ ಹೊಂದಿದ್ದರು. ಶೂರತ್ವದಿಂದ ವಿಜಯನಗರ ಅರಸರ ಗೌರವ ಪಡೆದು ಭೂಮಿಯನ್ನು ಅವರಿಂದ ಹೊಂದಿ ಆ ಭೂಮಿ ಕೃಷಿಗೆ ಯೋಗ್ಯವಾಗುವಂತೆ ಪ್ರಯತ್ನಿಸಿದ್ದರೆಂದು ಸ್ಥಳೀಯ ಐತಿಹ್ಯದಿಂದ ತಿಳಿದುಬರುತ್ತದೆ.[12] ಕೆಳದಿ ಅರಸರಿಗೆ ಅವರ ರಾಜ್ಯ ಬಾರಕೂರಿನವರೆಗೆ ವಿಸ್ತರಿಸಲು ಹಳೆಪೈಕರು ಬಹಳ ಸಹಾಯ ಮಾಡಿದ್ದರು. ಇದರಿಂದಾಗಿ, ಈ ಹಳೆಪೈಕರು ಗೇರಸೊಪ್ಪೆ, ಭಟ್ಕಳ, ಬಸ್ರೂರ, . ಕುಂದಾಪುರ ಮತ್ತು ಬಾರಕೂರಿನವರೆಗಿನ ಪ್ರದೇಶಗಳಲ್ಲಿ ಉತ್ತಮ ಕೃಷಿಕರಾಗಿ ಭೂಹಿಡುವಳಿಗಾರರಾಗಿದ್ದರು. ಹೆಚ್ಚಿನ ಜವುಗು ಪ್ರದೇಶವನ್ನು ಕೃಷಿ ಭೂಮಿ ಮಾಡಿದ್ದು ಇದರ ಶ್ರಮದಿಂದಾಗಿಯೇ. ಬ್ರಿಟಿಷರ ಆಳ್ವಿಕೆ ಸ್ಥಾಪನೆಯಾದೊಡನೆ ಹೆಚ್ಚಿನ ಹಳೆಪೈಕರು ಭೂಮಿಯನ್ನು ಕಳೆದುಕೊಂಡು, ಕೃಷಿಯ ಶ್ರಮಜೀವಿಗಳಾದರೆಂದು ಆಂಗ್ಲ ದಾಖಲೆ ಮತ್ತು ಆಂಗ್ಲ ಪ್ರವಾಸಿ ಬುಕಾನನ್ ವರದಿಯಿಂದ ತಿಳಿದುಬರುತ್ತದೆ.[13]

ಮಲೆಕುಡಿಯರು ಹೆಚ್ಚಿನ ಗುಡ್ಡಕಾಡು ಪ್ರದೇಶವನ್ನು ಕುಮರಿ ಬೇಸಾಯದಿಂದ ಫಲವತ್ತಾಗಿ ಮಾಡಿದ್ದರು. ಈ ಕುಮರಿ ಬೇಸಾಯ ಕ್ರಿ. ಶ. ೧೩೪೮ರಲ್ಲಿ ಆರಂಭವಾಗಿದೆಯೆಂದು ಇಡಗುಂಜೆಯ ಶಾಸನದಿಂದ ತಿಳಿದು ಬರುತ್ತದೆ.[14] ಸಹ್ಯಾದ್ರಿ ಬೆಟ್ಟದ ತಪ್ಪಲು ಕೃಷಿ ಭೂಮಿ ಮಾಡಿದ್ದು ಈ ಮಲೆಕುಡಿಯರ ಕುಮರಿ ಬೇಸಾಯದಿಂದಲೆಂದು ಸ್ಥಳೀಯ ಐತಿಹ್ಯ ಮತ್ತು ಬುಕಾನನ್‌ನ ವರದಿಗಳ ಅಧ್ಯಯನದಿಂದ ತಿಳಿಯಬಹುದು.[15] ಇವರು ಬೆಟ್ಟಗಳ ಓರೆಗಳಲ್ಲಿದ್ದ ಗಿಡಮರಗಳನ್ನು ಕಡಿದು ರಾಗಿಯನ್ನು ಬಿತ್ತುತ್ತಿದ್ದರು. ಆಮೇಲೆ ಮತ್ತೆ

9. *SII*, IX, No. 620; ಐಗಳ, ಅದೇ, ಈ ಮೂಲಿಭೂಮಿ ಮಂಜೇಶ್ವರದ ಶ್ರೀಮದನಂತೇಶ್ವರ ದೇವಾಲಯಕ್ಕೆ ಸೇರಿತು.
10. Ibid, VII, 365 ; *ARSIE*, 1930, No. 588 and 579
11. *Indian Antiquary*, XIII, p. 34-48
12. Thurston, *Castes and Tribes of Southern India*, (New Delhi, 1975), II, p. 320-2,
13. *Calcutta Review*, XI, p. 365 ; Kanara II, p. 146 ; Buchanan, *A Journey from Madras Through the Countries of Mysore, Canara & Malabar*, II, (Madras, 1870), p. 239
14. *KI*, III, Pt. I, No. 6, p. 11
15. ಎಲ್. ಆರ್. ಹೆಗಡೆ, ಕುಮರಿ ಮರಾಠಿಗರ ಕಥೆಗಳು, (ಕುಮಟಾ, ೧೯೮೧) ಪು. ೧, ೧೦-೧೨, ೧೬೯, ೧೭೬ ; Buchanan, p. 252

ಬೇರೆ ಗುಡ್ಡಗಳಿಗೆ ಹೋಗಿ ಅದೇ ಹೋರೆಯನ್ನು ಮುಂದುವರಿಸುತ್ತಿದ್ದರು. ಇಷ್ಟಲ್ಲದೆ ಭತ್ತ ಮತ್ತು ತರಕಾರಿ ಬೆಳೆಸುವುದರಲ್ಲೂ ಇವರು ಆಸಕ್ತರಾಗಿದ್ದರು. ಕೊರಗ, ಬಾಕುಡ, ಹೊಲೆಯ-ಈ ಜಾತಿಯವರು ಮೂಲತಃ ಕನ್ನಡ ಕರಾವಳಿಯಲ್ಲಿ ಬೇಸಾಯ ಮಾಡಿದವರು. ಸ್ಥಳೀಯ ಐತಿಹ್ಯದಲ್ಲಿ ಪ್ರಚಾರವಿದ್ದಂತೆ ಹುಂಬಾಸಿ ಮತ್ತು ನಂದುರಾಯರೆಂಬ ಹೊಲೆಯರು ಕನ್ನಡ ಕರಾವಳಿಯ ಹೆಚ್ಚಿನ ಪ್ರದೇಶದ ಅರಸರಾಗಿದ್ದು ಅವರ ನೇತೃತ್ವದಲ್ಲಿ ಹೊಲೆಯರು ಭೂ ಮಾಲೀಕ ಮತ್ತು ಕೃಷಿಕರಾಗಿದ್ದರೆಂದು ತಿಳಿಯಲು ಆಸ್ಪದವಿದೆ. ಇಷ್ಟಲ್ಲದೆ ಕನ್ನಡ ಕರಾವಳಿಯ ಪ್ರಮುಖ ದೇವಾಲಯಗಳ ಸ್ಥಳೀಯ ಇತಿಹಾಸದಂತೆ, ಈ ದೇವಾಲಯಗಳ ಭೂಮಿಗಳನ್ನು ಹೊಲೆಯರು ಆಕ್ರಮಿಸಿ ಬೇಸಾಯ ಮಾಡಿ, ದೇವರ ಪೂಜಾಕ್ರಮಕ್ಕೆ ಭಂಗ ತಂದಾಗ ಕದಂಬ ಅರಸರು ಇವರ ಉಪಟಳ ನಿಲ್ಲಿಸಿ, ಭೂಮಿಗಳನ್ನು ಅವರಿಂದ ಕಸಿದುಕೊಂಡು ಬ್ರಾಹ್ಮಣರಿಗೆ ದೇವಪೂಜೆ ಮತ್ತು ಧಾರ್ಮಿಕ ಕಟ್ಟಳೆಗಳನ್ನು ನಡೆಸಿಕೊಂಡು ಬರಲು ದಾನ ಮಾಡಿದರು.[16] ಈ ದಂತಕತೆಗಳಲ್ಲಿ ಕಾಲಾನುಕ್ರಮ ಪಟ್ಟಿ ಮತ್ತು ಅರಸರ ಹೆಸರುಗಳು ಒಂದಕ್ಕೊಂದು ವಿರೋಧವಿದ್ದರೂ ಹೊಲೆಯರು ಕೃಷಿಯ ಜೀವನದಲ್ಲಿ ಮುಖ್ಯ ಪಾತ್ರ ವಹಿಸಿದ್ದರೆಂದು ತಿಳಿಯಲು ಆಸ್ಪದವಿದೆ. ಮಧ್ಯಕಾಲೀನ ಇತಿಹಾಸದಲ್ಲಿ ಹೊಲೆಯರು ಭೂಮಿ ಒಡೆಯರಾದದ್ದು ಬಹಳ ಕಡಿಮೆ. ಉಪ್ಪುಂದ ದುರ್ಗಾ ಪರಮೇಶ್ವರಿ ದೇವಾಲಯದ ಎರಡು ತಾಮ್ರ ಶಾಸನ (ಕ್ರಿ. ಶ. ೧೫೫೫) ಗಳಲ್ಲಿ ಹೊಲೆಯರ ಗದ್ದೆಯ ವಿಚಾರ ಉಲ್ಲೇಖವಿದ್ದರೂ ಇವರು ಈ ದೇವಾಲಯದ ದೇವಪ್ಪ ಗದ್ದೆಯ ಒಕ್ಕಲಾಗಿಯೇ ಇದ್ದರು. ಹದಿನೈದನೇ ಶತಮಾನದ ಕೆಲವು ಶಾಸನಗಳು ಈ ಹೊಲೆಯರನ್ನು ಕೃಷಿ ಗುಲಾಮರೆಂದು (ಹೊಲೆಯಾಳು, ಮಣ್ಣಾಳು, ಹುಟ್ಟಾಳು) ತಿಳಿಸಿ ಇವರ ವಿಕ್ರಯವಾಗುವುದನ್ನು ತಿಳಿಸಿವೆ. ಇದು ಹದಿನೆಂಟನೇ ಶತಮಾನದವರೆಗೆ ಮುಂದುವರಿಯಿತು.[17] ಇದರಿಂದ ವ್ಯಕ್ತವಾಗುವುದೇನೆಂದರೆ ಕೃಷಿಯ ಭೂಮಿಯ ರಚನೆಗೆ ಈ ಹೊಲೆಯರ ಸೇವೆ ಅತ್ಯಗತ್ಯವಿತ್ತು. ಇದರಿಂದಾಗಿಯೇ ಭೂಮಿ ವಿಕ್ರಯವಾಗುವುದಾಗಲಿಲ್ಲ. ಬೇಸಾಯದಲ್ಲಿ ನಿರತರಾಗಿದ್ದ ಕೂಲಿಯಾಳುಗಳಾದ ಹೊಲೆಯರ ಸೇವೆಯನ್ನು ಭೂ ಹಿಡುವಳಿಗಾರರು ಅಪೇಕ್ಷಿಸುತ್ತಿದ್ದರು. ಕೆಸರಿನ ಭೂಮಿ (ಕಳವು ಗದ್ದೆ), ಜವುಗು ಪ್ರದೇಶ, ಗುಡ್ಡ ಮತ್ತು ಕಾಡು ಪ್ರದೇಶಗಳು ಕೃಷಿ ಭೂಮಿಯಾಗಿ ಮಾರ್ಪಡಲು ಹೊಲೆಯರು ಶ್ರಮ ವಹಿಸಿದ್ದರು. ಈ ಹೊಲೆಯ ಅಥವಾ ಬಾಕುಡರ ಶ್ರಮ, ಇದರಿಂದಾದ ಕೃಷಿ ಭೂಮಿಗಳು ಮತ್ತು ಇವರ ಬೇಸಾಯ ಪದ್ಧತಿಗಳನ್ನು ಪ್ರವಾಸಿ ಬುಕಾನನ್ ವಿವರಿಸಿದ್ದಾನೆ.[18] ಈ ಜಾತಿಯವರ ಶ್ರಮದಿಂದಾಗಿ ಕನ್ನಡ ಕರಾವಳಿಯಲ್ಲಿ ಕೃಷಿ ಭೂಮಿ ಹೆಚ್ಚಿತೆಂದು ಅಭಿಪ್ರಾಯಪಡಬಹುದು.

---

16. ಕೆ. ಕೆ. ಕುಡ್ವ, ಕನ್ನಡ ಜಿಲ್ಲೆಯ ಇತಿಹಾಸ, (ಮಂಗಳೂರು, ೧೯೪೮), ಪು. ೪೮; ಗಣಪತಿ ಶಿವಭಟ್ಟ, ಗೋಕರ್ಣ ಕ್ಷೇತ್ರ ಮಹಾತ್ಮ್ಯೆ, ಪು. ೪೯; Buchanan, p. 271
17. *SII*, VII, 198, 365, 417; A. K. Shastry, *Sringeri Dharma Samasthana*, (Sringeri, 1983), p. 187
18. Buchanan, pp. 271-72